

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 31-03-2021 ಪ್ರಶ್ನೆ ಸಂಖ್ಯೆ : 3050 (2500)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಬಿ.ಎಂ. ಫಾರೂಖ್ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 31-03-2021

ಉತ್ತರಿಸುವ ಸಚಿವರು: ಕಂದಾಯ ಸಚಿವರು

ವಿಷಯ : ಸರ್ಕಾರಿ ಭೂ ದಾಖಲೆಗಳನ್ನು ಅಕ್ರಮವಾಗಿ ಬದಲಾಯಿಸಿರುವ ಬಗ್ಗೆ

(ಅ) 2013-14ನೇ ಸಾಲಿನಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನ ವಿವಿಧ ಗ್ರಾಮಗಳ ಸರ್ಕಾರಿ ಭೂ ದಾಖಲೆಗಳನ್ನು ಅಕ್ರಮವಾಗಿ ಆಗಿನ ಉಪ ತಹಸೀಲ್ದಾರ್‌ರವರು ಬದಲಾಯಿಸಿರುವುದು ಸರಕಾರದ ಗಮನಕ್ಕೆ ಬಂದಿದೆಯೇ;

(ಆ) ಬಂದಿದ್ದಲ್ಲಿ ಯಾವ ಯಾವ ಗ್ರಾಮಗಳ ಸರ್ಕಾರಿ ಭೂ ದಾಖಲೆಗಳನ್ನು ಅಕ್ರಮವಾಗಿ ಬದಲಾಯಿಸಲಾಗಿದೆ; (ಸರ್ವೆ ನಂಬರ್ ವಾರು ವಿವರ ಒದಗಿಸುವುದು)

(ಇ) ಸದರಿ ಸರ್ಕಾರಿ ಭೂ ದಾಖಲೆಗಳನ್ನು ಅಕ್ರಮವಾಗಿ ವರ್ಗಾಯಿಸುವುದಕ್ಕೆ ಚಿಂತಾಮಣಿ ನಗರ ಪೊಲೀಸ್ ಠಾಣೆಯಲ್ಲಿ ದೂರು ದಾಖಲಾಗಿರುವುದು ನಿಜವೇ; (ದೂರಿನ ಪ್ರತಿ ಒದಗಿಸುವುದು)

(ಈ) ಸದರಿ ಸರ್ಕಾರಿ ಭೂ ದಾಖಲೆಗಳನ್ನು ಬದಲಾಯಿಸಲು ಆಗಿನ ಉಪ ತಹಸೀಲ್ದಾರವರೇ ಕಾರಣಕರ್ತರೆಂದು ಇಲಾಖಾ ವಿಚಾರಣೆಯಲ್ಲಿ ಸಾಬೀತಾದರೂ ಅವರನ್ನು ಸೇವೆಯಿಂದ ವಜಾ ಮಾಡದೇ ಕೇವಲ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಕಡಿತಗೊಳಿಸಿ ಅವರ ಸೇವೆಯನ್ನು ಹೊಸಕೋಟೆ ತಾಲ್ಲೂಕಿನ ಅನುಗೊಂಡನ ಹಳ್ಳಿಯ ಉಪ ತಹಸೀಲ್ದಾರಾಗಿ ಮುಂದುವರಿಸಲು ಕಾರಣವೇನು; (ವಿವರ ಒದಗಿಸುವುದು)

(ಉ) ಸದರಿ ಸರ್ಕಾರಿ ಭೂ ದಾಖಲೆಗಳನ್ನು ಅಕ್ರಮವಾಗಿ ವರ್ಗಾಯಿಸುವುದಕ್ಕೆ ಕಾರಣರಾದ ತಪ್ಪಿತಸ್ಥ ಉಪ ತಹಸೀಲ್ದಾರರನ್ನು ಯಾವ ಕಾಲಮಿತಿಯೊಳಗೆ ಸೇವೆಯಿಂದ ವಜಾ ಮಾಡಲಾಗುವುದು?